**ಆ. ರಾಸ ಸಾಹಿತ್ಯ ವಿಮರ್ಶಾಲೇಖನ ಪ್ರಶಸ್ತಿ :** ಸಮೇತನಹಳ್ಳಿ ರಾಮರಾವ್ ಅವರ ಕೃತಿಗಳ ವಿಮರ್ಶೆಯ ಒಂದು ಉತ್ತಮ ಲೇಖನಕ್ಕೆ ಕೊಡುವ 500–00 ರೂ.ಗಳ ಈ ಪ್ರಶಸ್ತಿಯನ್ನು ಸ್ವತಃ ಲೇಖಕರು 1995ರಲ್ಲಿ ಸ್ಥಾಪಿಸಿದ್ದಾರೆ.

**ಇ. ಅನಂತರಂಗ ಸಂಶೋಧನಾ ಸಾಹಿತ್ಯ ಪ್ರಶಸ್ತಿ :** ಶ್ರೀ ಕಟ್ಟೆ ನಾಗರಾಜ್ ಅವರು ತಮ್ಮ ಅನಂತರಂಗ ಪ್ರತಿಷ್ಠಾನದ ಹೆಸರಿನಲ್ಲಿ 1998ರಲ್ಲಿ ಸ್ಥಾಪಿಸಿದ್ದಾರೆ. ಪ್ರತಿವರ್ಷಉತ್ತಮ ಸಂಶೋಧನ ಸಾಹಿತ್ಯ ಕೃತಿಗೆ ರೂ.1,000–00ದ ಮೊತ್ತ ಪ್ರಶಸ್ತಿ ನೀಡಲಾಗುವುದು.

**ಈ. ಎಂ.ವಿ.ಸೀ. ಪುರಸ್ಕಾರ :** ಎಂ.ವಿ. ಸೀತಾರಾಮಯ್ಯನವರ ಹೆಸರಿನಲ್ಲಿಅವರ ಮಕ್ಕಳು 2002ರಲ್ಲಿ ಈ ಪ್ರಶಸ್ತಿ ಸ್ಥಾಪಿಸಿದ್ದಾರೆ. ಸೀತಾರಾಮಯ್ಯನವರ ಮುಖ್ಯ ಕಾರ್ಯಕ್ಷೇತ್ರಗಳಾದ ಸೃಜನ ಸಾಹಿತ್ಯ, ಸಂಶೋಧನ ಸಾಹಿತ್ಯ ಮತ್ತು ಸಾಹಿತ್ಯ ಸಂಘಟನೆ – ಈ ಮೂರು ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿರುವ, ಮತ್ತು ಯಾವುದೇ ಗಣ್ಯ ಪ್ರಶಸ್ತಿಯನ್ನು ಆವರೆಗೆ ಪಡೆಯದಿರುವ, ಅತ್ಯಂತ ಹಿರಿಯ ಸಾಹಿತಿಗಳಿಗೆ ಈ ಪ್ರಶಸ್ತಿಯನ್ನು, ಹಾಗೂ ನಗದು ಹಣ ರೂ.10,000 ರೂ.ಗಳನ್ನು ಪ್ರತಿ ವರ್ಷ ಅನುಕ್ರಮವಾಗಿ ಒಂದು ವಿಭಾಗಕ್ಕೆ ನೀಡಲಾಗುವುದು.

**ಉ. ದಿ|| ಪುಟ್ಟಚ್ಚಮ್ಮ–ವೆಂಕಟರಾಮಯ್ಯ ಕಥೆ–ಕಾದಂಬರಿ ಪ್ರಶಸ್ತಿ :** ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ತಮ್ಮ ದತ್ತು ತಂದೆ–ತಾಯಿ ಹೆಸರಿನಲ್ಲಿ ಸ್ಥಾಪಿಸಿರುವ ಈ ಪ್ರಶಸ್ತಿಯನ್ನು ಒಂದು ವರ್ಷ ಉದಯೋನ್ಮುಖ ಲೇಖಕಿಯ ಕಥಾ ಸಂಕಲನಕ್ಕೆ, ಒಂದು ವರ್ಷ ಉತ್ತಮ ಕಾದಂಬರಿಗೆ, ನೀಡಲಾಗುತ್ತಿದೆ. ಪ್ರಶಸ್ತಿ ಮೊತ್ತ ನಗದು ರೂ. 2000/–.

## 8. ಸಾಂಸ್ಕೃತಿಕ ಚಟುವಟಿಕೆಗಳು

ಪ್ರತಿಷ್ಠಾನದಲ್ಲಿ ಆಧುನಿಕ ಸಾಹಿತ್ಯವನ್ನು ಪರಿಚಯಿಸುವ ಮತ್ತು ಪ್ರೋತ್ಸಾಹಿಸುವ ಉದ್ದೇಶದಿಂದ ಈ ಕೆಲವು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ.

**ಅ. ಬಿ.ಎಂ.ಶ್ರೀ ಮತ್ತು ಪಿ. ಕಾಳಿಂಗರಾವ್ ಸ್ಮಾರಕ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆ :** ಪಿ. ಕಾಳಿಂಗರಾವ್ ಬಳಗದ ಸಹಕಾರದೊಂದಿಗೆ 2000 ದಿಂದ, ಭಾವಗೀತೆ ಮತ್ತು ಜನಪದ ಗೀತೆಗಳಲ್ಲಿ ಹಿರಿಯರ ಹಾಗೂ ಕಿರಿಯರ ವಿಭಾಗದಲ್ಲಿ ಈ ಸ್ಪರ್ಧೆಯನ್ನು ನಡೆಸಲಾಗುತ್ತಿದ್ದು ಪ್ರತಿವರ್ಷಒಟ್ಟು 16 ಬಹುಮಾನಗಳನ್ನು ನೀಡಲಾಗುತ್ತಿದೆ. ಪ್ರತಿ ವರ್ಷ ಡಿಸೆಂಬರ್ / ಜನವರಿಯಲ್ಲಿ ಈ ಸ್ಪರ್ಧೆ ನಡೆಯುತ್ತದೆ.

**ಆ. ಡಾ. ಗೋವಿಂದ ಜಾಲೀಹಾಳ ಭಕ್ತಿ ಗೀತೆಗಳ ಸ್ಪರ್ಧೆ:** ಯುವ ಪ್ರತಿಭೆಗಳನ್ನು ಪ್ರೋತ್ಸಾಹಿಸುವ ಸಲುವಾಗಿ ಡಾ. ಗೋವಿಂದ ಜಾಲೀಹಾಳ ಹಾಗೂ ಅವರ ಮಕ್ಕಳು ಸ್ಥಾಪಿಸಿರುವ ಈ ದತ್ತಿ ಸಂಗೀತ ಕಾರ್ಯಕ್ರಮ ಪ್ರತಿವರ್ಷ ನಡೆಯುತ್ತಿದೆ.

**ಇ. ಕನ್ನಡ ಸಾಹಿತ್ಯೋಪಾಸಕರು–ವಿಶೇಷ ಕಾರ್ಯಕ್ರಮ :** ಕನ್ನಡ ನಾಡು ನುಡಿಗಾಗಿ ಶ್ರಮಿಸಿದ ಹಿರಿಯ ಸಾಹಿತಿ ಗಣ್ಯರನ್ನು ಕುರಿತು ಉಪನ್ಯಾಸ ಕಾರ್ಯಕ್ರಮವನ್ನು ಪ್ರತಿ ತಿಂಗಳೂ ನಡೆಸಲಾಗುತ್ತಿದೆ.

**ಈ. ಸಿರಿಸಂಗೀತ :** ರಜತೋತ್ಸವದ ನೆನಪಿಗಾಗಿ 2004 ರಿಂದ ಆರಂಭಮಾಡಿರುವ ಈ 'ಸಿರಿಸಂಗೀತ' ಪ್ರತಿ ತಿಂಗಳ ಸಂಗೀತ ಕಾರ್ಯಕ್ರಮ ವೇದಿಕೆ. ಜನಪ್ರಿಯವಾಗಿರುವ ಸುಗಮ ಸಂಗೀತ ಕ್ಷೇತ್ರಕ್ಕೆ ಸಾಹಿತ್ಯದ ವ್ಯಾಪಕತೆಯನ್ನು ಒದಗಿಸುವ ಉದ್ದೇಶದಿಂದ ಭಾವಗೀತೆ, ಜನಪದಗೀತೆ, ವಚನ, ಕೀರ್ತನೆ, ತತ್ವಪದ ಮತ್ತು ಗಮಕ ಸಂಗೀತ ಕಾರ್ಯಕ್ರಮಗಳನ್ನು ಅನುಕ್ರಮವಾಗಿ ತಿಂಗಳಿಗೊಂದರಂತೆ ನಡೆಸಲಾಗುವುದು. ಈ ಕಾರ್ಯಕ್ರಮ ಮಾಲೆಯಲ್ಲಿ ಹೊಸ ಹೊಸ ಸಾಹಿತ್ಯವನ್ನು ಸಂಗೀತಕ್ಕೆ ಅಳವಡಿಸುವ ಕಲಾ ತಂಡಗಳಿಗೆ, ವಿಶೇಷವಾಗಿ ಉದಯೋನ್ಮುಖ ಕಲಾವಿದರಿಗೆ ಆದ್ಯತೆ ನೀಡಲಾಗುವುದು.

**9. ಬಿ.ಎಂ. ಶ್ರೀ ನೆನಪಿನ ಕಾರ್ಯಕ್ರಮ :** ಈ ವರೆಗೆ ಜನವರಿ 3 ರಂದು ನ್ಯಾಷನಲ್ ಕಾಲೇಜು ವೃತ್ತದಲ್ಲಿರುವ ಬಿ.ಎಂ.ಶ್ರೀ . ಪ್ರತಿಮೆಗೆ ಹಾಗೂ ಪ್ರತಿಷ್ಠಾನದಲ್ಲಿರುವ ಪ್ರತಿಮೆಗೆ ಮಾಲಾರ್ಪಣೆ ಮಾಡಿ ಪ್ರತಿದಿನ ಪೂರ್ತಿ ಬಿ.ಎಂ.ಶ್ರೀ ಅವರ ನೆನಪಿನ ಕಾರ್ಯಕ್ರಮ, ಗೀತಗಾಯನ ಸ್ಪರ್ಧೆ ನಡೆಸಿ ಬಹುಮಾನ ನೀಡಲಾಗುತ್ತಿತ್ತು. 2014 ರಿಂದ ಬಿ.ಎಂ.ಶ್ರೀ ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಬಾಲುರಾವ್ ಅವರು ನೀಡಿರುವ 15 ಲಕ್ಷದತ್ತಿ ವತಿಯಿಂದ ಕನ್ನಡ ಭಾಷೆಯ ಶ್ರೇಷ್ಠ ಸಾಹಿತಿಯೊಬ್ಬರ ಸಮಗ್ರ ಕೊಡುಗೆಯನ್ನು ಪರಿಗಣಿಸಿ ಆಯ್ಕೆ ಸಮಿತಿಯು ಸೂಚಿಸಿದವರಿಗೆ ರೂ. ಒಂದುಲಕ್ಷ ನಗದು ಮತ್ತು ಸ್ಮರಣಿಕೆಯನ್ನು ನೀಡಲಾಗುವುದು.

## ಬಿ.ಎಂ.ಶ್ರೀ.ಕಲಾಭವನ

150 ರಿಂದ 200 ಜನರಿಗೆ ಸ್ಥಳಾವಕಾಶ, ಧ್ವನಿ – ಬೆಳಕಿನ ಸೌಲಭ್ಯ ಇರುವ ಈ ಸಭಾ ಭವನ ಸಾಹಿತ್ಯ – ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಅನುಕೂಲಕರವಾಗಿದೆ.

ಉಪನ್ಯಾಸ, ವಿಚಾರ ಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಂಕೇತಿಕ ಸೇವಾ ಶುಲ್ಕದ ಮೇರೆಗೆ ಸಾರ್ವಜನಿಕರು, ಸಂಘ–ಸಂಸ್ಥೆಗಳಿಗೆ ನೀಡಲಾಗುವುದು.

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ನೀವೂ ಈ ರೀತಿಯಾಗಿ ಸಹಾಯ ಮಾಡಬಹುದು

ಅ. ಸದಸ್ಯರಾಗುವುದರ ಮೂಲಕ :

ಆ. ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ

ಇ. ಪ್ರತಿಷ್ಠಾನದ ಚಟುವಟಿಕೆಗಳಿಗೆ ಧನ ಸಹಾಯದ ಮೂಲಕ. ದಾನಿಗಳಿಗೆ ಆದಾಯ ತೆರಿಗೆ ಕಾನೂನಿನ ಅಡಿಯಲ್ಲಿ ಸೆಕ್ಷನ್ 80 ಜಿ ಸೌಲಭ್ಯ ಲಭ್ಯವಾಗುತ್ತದೆ.

ಈ. ಕಚೇರಿ–ಗ್ರಂಥಾಲಯಗಳಿಗೆ ಬೇಕಾಗುವ ಪೀಠೋಪಕರಣಗಳ ಹಾಗೂ ಉಪಕರಣಗಳನ್ನು ದಾನರೂಪದಲ್ಲಿ ನೀಡುವ ಮೂಲಕ.

ಉ. ಪುಸ್ತಕ – ಹಸ್ತಪ್ರತಿ – ಪತ್ರಗಳ ದಾನದ ಮೂಲಕ : ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ – ಸಂರಕ್ಷಣೆ ಪ್ರತಿಷ್ಠಾನದ ಬಹುಮುಖ್ಯ ಚಟುವಟಿಕೆ. ನಾಡಿನಅಮೂಲ್ಯ ಆಸ್ತಿಯಾದ ಈ ಹಸ್ತಪ್ರತಿಗಳು, ಓಲೆಗರಿ, ಕಾಗದ, ಪತ್ರಗಳ ರೂಪದಲ್ಲಿರುತ್ತದೆ. ಇವುಗಳಿಂದ ಪ್ರಾಚೀನ ಸಾಹಿತ್ಯ ಸಂಸ್ಕೃತಿಯ ಅಧ್ಯಯನ ಸಾಧ್ಯವಾಗುತ್ತದೆ. ಇವುಗಳನ್ನು ಮುಂದಿನ ಪೀಳಿಗೆಗೆ ಉಳಿಸಿ ಬೆಳೆಸುವ ಜವಾಬ್ದಾರಿ ಇಂದಿನ ಪೀಳಿಗೆಯವರಾದ ನಮ್ಮ ಮೇಲಿರುತ್ತದೆ. ಆದ್ದರಿಂದ ಹಸ್ತಪ್ರತಿಗಳನ್ನು ಅವುಗಳ ಮೂಲರೂಪದಲ್ಲೇ ಉಳಿಸಿ ರಕ್ಷಿಸುವ ಕಾರ್ಯವನ್ನು ಪ್ರತಿಷ್ಠಾನ ನಿಷ್ಠೆಯಿಂದ ಮಾಡುತ್ತಿದೆ. ಇಂತಹ ಹಸ್ತಪ್ರತಿಗಳು ನಿಮ್ಮಲ್ಲಿದ್ದರೆ, ಹಾಳುಮಾಡದೆ, ನಿರ್ಲಕ್ಷಿಸದೆ ದಾನವಾಗಿ ನೀಡಬಹುದು. ಮೌಲಿಕ ಪುಸ್ತಕಗಳನ್ನೂ ಸಾಹಿತಿ – ಗಣ್ಯರ ಪತ್ರ – ಹಸ್ತ ಪ್ರತಿಗಳನ್ನು ಪ್ರತಿಷ್ಠಾನಕ್ಕೆ ದಾನಮಾಡಬಹುದು.

ಊ. ಸ್ವಯಂಸೇವಕರಾಗಿ ಸಹಕರಿಸುವ ಮೂಲಕ : ಪ್ರತಿಷ್ಠಾನದಲ್ಲಿ ಕಚೇರಿ, ಗ್ರಂಥಾಲಯ, ಸಭಾಂಗಣ ಮತ್ತು ವಿವಿಧ ಕಾರ್ಯಕ್ರಮ ಚಟುವಟಿಕೆಗಳಲ್ಲಿ ಸ್ವಯಂಸೇವಕರಾಗಿ ಸಹಕರಿಸುವ ಮೂಲಕವೂ ಪ್ರತಿಷ್ಠಾನ ನಡೆಸುತ್ತಿರುವ 'ಕನ್ನಡಕೈಂಕರ್ಯ'ದಲ್ಲಿ ಸೇವೆಸಲ್ಲಿಸಬಹುದು.

ಋ. ಪ್ರಸ್ತಕಗಳನ್ನು ಕೊಳ್ಳುವ ಮೂಲಕ : ಪ್ರತಿಷ್ಠಾನದ ಪ್ರಕಟನೆಗಳು ಕನ್ನಡ ಸಾಹಿತ್ಯಸಂಸ್ಕೃತಿಯ ಅಧ್ಯಯನದ ಮೌಲಿಕ ಗ್ರಂಥಗಳಾಗಿದ್ದು ಅವುಗಳನ್ನು ಸ್ವಂತಕ್ಕೆ, ಸ್ನೇಹಿತರಿಗೆ, ಸಂಘ – ಸಂಸ್ಥೆ, ಗ್ರಂಥಾಲಯಗಳಿಗೆ ಕೊಳ್ಳುವ ಮೂಲಕ ಸಹಕರಿಸಬಹುದು.








ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಎಂ.ಎಂ.ಸೀ. ಸಂಶೋಧನಕೇಂದ್ರ

# ಕನ್ನಡ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಅಧ್ಯಯನ ಕೇಂದ್ರ

## ಬಿ.ಎಂ.ಶ್ರೀ ಕಲಾಭವನ

3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲನಿ, ಬೆಂಗಳೂರು – 560 019.

ದೂರವಾಣಿ: 26615877

ಈ ಅಂಚೆ: bmsritrust@gmail.com ಜಾಲತಾಣ: www.bmshri.org

## ಪರಿಚಯ

### ಧ್ಯೇಯ – ಉದ್ದೇಶ

'ಕನ್ನಡಕಣ್ವ' ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು ಹೊಸಗನ್ನಡದ ಯುಗ ಪುರುಷರು; ಇಂದು ಹೊಸಗನ್ನಡದ ಸಾಹಿತ್ಯ ಎಂದು ಯಾವುದನ್ನು ಕರೆಯುತ್ತೇವೆಯೋ ಅದೆಲ್ಲಕ್ಕೂ ಪ್ರೇರಕ ಶಕ್ತಿ.ಇಂದಿನ ಎಲ್ಲ ಹೆಸರಾಂತ ಸಾಹಿತಿಗಳೂ ಇವರ ಶಿಷ್ಯ–ಪ್ರಶಿಷ್ಯರೇ, ಇಂತಹಆಚಾರ್ಯ ಪುರುಷರ ಹೆಸರಿನ ಈ ಸಂಸ್ಥೆ ಸೃಜನ ಮತ್ತು ಸಂಶೋಧನಎರಡೂ ಸಾಹಿತ್ಯ ಕ್ಷೇತ್ರಗಳಲ್ಲಿ ದುಡಿಯುತ್ತಿದೆ.ಒಂದು ಪ್ರಾಚೀನ ಸಾಹಿತ್ಯದ ಪರಿಷ್ಕರಣ. ಇನ್ನೊಂದುಆಧುನಿಕ ಸಾಹಿತ್ಯದ ಪುರಸ್ಕರಣ.

"ದೇಶದಲ್ಲಿ ಹುಳು ತಿಂದುಹೋಗದೆಇರುವ ಗ್ರಂಥಗಳನ್ನೆಲ್ಲ ಶೇಖರಿಸಿ ಒಂದನ್ನೂ ಬಿಡದಂತೆಅಚ್ಚುಹಾಕುವುದು.ಅಚ್ಚಾದ ಮೇಲೆ ಎಲ್ಲವನ್ನೂಕೊನೆಮುಟ್ಟ ಶೋಧಿಸಿ ಹೊಸದಾಗಿ ಲಕ್ಷಣ ಗ್ರಂಥಗಳನ್ನು ಕಾಲಕ್ಕೆ ತಕ್ಕಂತೆ ರಚಿಸುವುದು. "ಇದು ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರು 1911ರಲ್ಲೇ ನುಡಿದ ವಾಣಿ. ಇದನ್ನೇ ಧ್ಯೇಯವಾಗಿಸಿಕೊಂಡು ಇದರ ಜೊತೆಗೆ ಸಂಶೋಧನಾ ಕ್ಷೇತ್ರಗಳಲ್ಲಿ ಅಳಿಸಿ ಹೋಗುತ್ತಿರುವ ಇತರ ಪೂರಕ ಸಂಶೋಧಕ ಪ್ರವೃತ್ತಿಗಳನ್ನು ಉಳಿಸಿ ಬೆಳೆಸುವ ಸಲುವಾಗಿ ಆಚಾರ್ಯರ ಹೆಸರಿನಲ್ಲಿ, ಈ ಸಂಸ್ಥೆಯನ್ನು1979 ರಲ್ಲಿ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ್ದು ರಾಷ್ಟ್ರಕವಿ ಕುವೆಂಪುರವರಿಂದ ಉದ್ಘಾಟನೆಯಾಗಿದೆ. ಯಶಸ್ವಿ 34 ವರ್ಷಗಳನ್ನು ಪೂರೈಸಿ 2004ರಲ್ಲಿ ರಜತೋತ್ಸವವನ್ನು ಆಚರಿಸಿದೆ.

ಸಂಸ್ಥಾಪಕರಾದ ದಿವಂಗತ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ತಮ್ಮತನು ಮನ ಧನವನ್ನು ಸಮರ್ಪಿಸಿ ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿ ನಾಡಿನಲ್ಲೆ ಒಂದು ಪ್ರತಿಷ್ಠಿತ ಸಂಸ್ಥೆಯನ್ನಾಗಿ ಮಾಡಿದ್ದಾರೆ. ಅವರ ಸಾಧನೆಯ ಫಲವಾಗಿ ಬೆಂಗಳೂರಿನಲ್ಲಿ "ಬಿ.ಎಂ.ಶ್ರೀ . ಕಲಾಭವನ", ತುಮಕೂರುಜಿಲ್ಲೆಯ 'ಸಂಪಿಗೆ'ಯಲ್ಲಿ 'ಬಿ.ಎಂ.ಶ್ರೀ .ಭವನ' ನಿರ್ಮಾಣಗೊಂಡು ಕಾರ್ಯನಿರತವಾಗಿವೆ. ಈ ಸಂಸ್ಥೆಯ ಬೆಳವಣಿಗೆಗೆ ಅನೇಕ ಹಿರಿಯರು ಕಾರಣರಾಗಿದ್ದಾರೆ.

### ಸಾಧನೆಗಳು

ಈಗಾಗಲೇ ಈ ಸಂಸ್ಥೆಯು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿರುತ್ತದೆ. ಕರ್ನಾಟಕದಲ್ಲಿ ಸಂಶೋಧನೆ ಮತ್ತು ಪಾಂಡಿತ್ಯ ಸಂವರ್ಧನೆಗಳಿಗೆ ಮೀಸಲಾದ ಪ್ರತಿಷ್ಠಿತ ಸಂಶೋಧನಾಕೇಂದ್ರವಾಗಿದೆ.ಈವರೆಗೆ ಸುಮಾರು 185 ಪ್ರಕಟಣೆಗಳನ್ನು ಹೊರತಂದಿದೆ. ಸಂಶೋಧನಕಾರ್ಯಕ್ಕೆ ಅನುಕೂಲವಾಗುವಂತೆ ಹದಿನೈದು ಸಾವಿರಕ್ಕೂ ಅಧಿಕ ಅಮೂಲ್ಯ ಗ್ರಂಥಗಳ ಆಕರಗ್ರಂಥಾಲಯವನ್ನೂ ಸುಮಾರು ಒಂದುಸಾವಿರಕ್ಕೂ ಅಧಿಕ ಪ್ರಾಚೀನ ಓಲೆಗರಿ ಗ್ರಂಥಗಳ ಹಸ್ತಪ್ರತಿ ಭಂಡಾರವನ್ನೂ ಹೊಂದಿರುವ ಪ್ರತಿಷ್ಠಾನ, ಸದಸ್ಯರು, ಉದಾರ ದಾನಿಗಳು ಮತ್ತು ಅಭಿಮಾನಿಗಳಿಂದಲೇ ಬೆಳೆಯುತ್ತಿದೆ.

### ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರವಾಗಿರುವ ಪ್ರತಿಷ್ಠಾನದಲ್ಲಿಗಣ್ಯ ವಿದ್ವಾಂಸರ ಮಾರ್ಗದರ್ಶನದಲ್ಲಿ 10 ಜನ ಪಿ.ಎಚ್‌ಡಿ. ಪದವಿ ಮತ್ತು 22 ವಿದ್ಯಾರ್ಥಿಗಳು ಎಂ.ಫಿಲ್. ಪದವಿ ಪಡೆದಿರುತ್ತಾರೆ.ನುರಿತ ಮಾರ್ಗದರ್ಶಕರ ಸಹಕಾರದಿಂದ ಈ ಅಧ್ಯಯನ ಕೇಂದ್ರವನ್ನು ನಡೆಸಲಾಗುತ್ತಿದೆ.

### ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನ ಮಾನ್ಯತೆಯಕೇಂದ್ರ

ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನಿಂದ ಮಾನ್ಯತೆ ಪಡೆದಿರುವ ಪ್ರತಿಷ್ಠಾನ ರಾಷ್ಟ್ರದ ಪ್ರತಿಷ್ಠಿತ ಹಸ್ತಪ್ರತಿ ಅಧ್ಯಯನ ಕೇಂದ್ರವಾಗಿದ್ದು ಅಮೂಲ್ಯ ಓಲೆಗರಿ ಗ್ರಂಥಗಳು, ಕಾಗದ ಪತ್ರಗಳು, ನಮ್ಮ ತಲೆಮಾರಿನ ಸಾಹಿತಿ–ಗಣ್ಯರ ಪತ್ರಗಳು ಮತ್ತು ಹಸ್ತಪ್ರತಿಗಳನ್ನು ಸಂರಕ್ಷಿಸುತ್ತ ನಾಡಿನ ಆಸ್ತಿಯನ್ನು ಉಳಿಸಲು ಶ್ರಮಿಸುತ್ತಿರುವ ಸೇವಾಸಂಸ್ಥೆಯಾಗಿದೆ.

### ಬಿ.ಎಂ.ಶ್ರೀ .ಕಲಾಭವನ

ಬೆಂಗಳೂರಿನಲ್ಲಿ ಬಿ.ಎಂ.ಶ್ರೀ ಸ್ಮಾರಕವನ್ನು, ಸಂಸ್ಥಾಪಕ ಸೀತಾರಾಮಯ್ಯನವರ ಪರಿಶ್ರಮದಿಂದ ಪಡೆಯಲಾಗಿದ್ದ ನಿವೇಶನದಲ್ಲಿ 2000 ರಿಂದ ಆರಂಭಿಸಿದೆ. 3 ಮಹಡಿಗಳ ಭವ್ಯ ಬಿ.ಎಂ.ಶ್ರೀ .ಕಲಾ ಭವನವನ್ನು ಸಂಸದರ ನಿಧಿ ಮತ್ತು ದಾನಿಗಳ ನೆರವಿನಿಂದಕಟ್ಟಲಾಗಿದೆ. "ಎಂ.ವಿ.ಸೀ. ಸಭಾಂಗಣ", ಗ್ರಂಥಾಲಯ, ವಸ್ತು–ಹಸ್ತಪ್ರತಿ ಸಂಗ್ರಹಾಲಯ, ಉಪನ್ಯಾಸ ಕೊಠಡಿಗಳು ನಿರ್ಮಾಣವಾಗಿದ್ದು ಪ್ರತಿಷ್ಠಾನ ದರ ಜತೋತ್ಸವದ ಸಂದರ್ಭದಲ್ಲಿ ಮುಖ್ಯಮಂತ್ರಿಗಳಿಂದ ಲೋಕಾರ್ಪಣೆಯಾಗಿದೆ.

### ಮುಖ್ಯ ಚಟುವಟಿಕೆಗಳು

#### 1. ಕರ್ನಾಟಕ ಲೋಚನ ವಿದ್ವತ್ ಪತ್ರಿಕೆ

ಕನ್ನಡದಲ್ಲಿರುವ ಕೆಲವೇ ಸಂಶೋಧನಾತ್ಮಕ ನಿಯತಕಾಲಿಕೆಗಳಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿರುವ "ಕರ್ನಾಟಕ ಲೋಚನ" ಪತ್ರಿಕೆಯನ್ನು ಪ್ರತಿಷ್ಠಾನ 1982ರಲ್ಲಿ ಆರಂಭಿಸಿತು. ಸಂಶೋಧನಕ್ಷೇತ್ರದ ವಿವಿಧ ಶಾಖೆಗಳಲ್ಲಿ ನುರಿತ ವಿದ್ವಾಂಸರು ಬರೆಯುವ ಸಂಶೋಧನ ಲೇಖನಗಳು, ಟಿಪ್ಪಣಿಗಳು, ಸಂಶೋಧನ ಗ್ರಂಥಗಳ ವಿಮರ್ಶೆ, ಟೀಕೆ–ಟಿಪ್ಪಣಿ ಇತ್ಯಾದಿ ಇದರಲ್ಲಿರುತ್ತವೆ. ನಿಯತವಾಗಿ ಪ್ರಕಟವಾಗುತ್ತಿರುವ ನಾಡಿನ ಏಕೈಕ ವಿದ್ವತ್ ಪತ್ರಿಕೆ ಎಂಬ ಹೆಗ್ಗಳಿಕೆ ಇದಕ್ಕಿದೆ.

'ವಾರ್ತಾಪತ್ರ'

ಪ್ರತಿಷ್ಠಾನ ಪ್ರಕಟಿಸುತ್ತಿರುವ ತ್ರೈಮಾಸಿಕ 'ವಾರ್ತಾಪತ್ರ' ಪ್ರತಿಷ್ಠಾನದ ಚಟುವಟಿಕೆಗಳ ವಿವರ ನೀಡುತ್ತಿದೆ. ಇದನ್ನುಎಲ್ಲಾ ಸದಸ್ಯರಿಗೂ ಅಂಚೆ ಮೂಲಕ ತಲುಪಿಸಲಾಗುತ್ತಿದೆ.

#### 2. ಸಹೃದಯ ಗೋಷ್ಠಿ

ಆಧುನಿಕ ಸಾಹಿತ್ಯಕ್ಕೆ ಸಂಬಂಧಪಟ್ಟ ವೇದಿಕೆ "ಸಹೃದಯ ಗೋಷ್ಠಿ"ಯಡಿಯಲ್ಲಿ ಪ್ರತಿಷ್ಠಾನ ಪ್ರಾರಂಭವಾದಂದಿನಿಂದಲೂ ಪ್ರತಿ ತಿಂಗಳೂ ಕಾರ್ಯಕ್ರಮವನ್ನು ನಡೆಸುತ್ತಿದೆ. ಸ್ವರ ಚಿತಕವಿತೆಕತೆ–ನಾಟಕ–ಪ್ರಬಂಧ–ಸಂಶೋಧನಾ ಲೇಖನಗಳ ವಾಚನ, ಇತರ ಗಣ್ಯರ ಕೃತಿ–ಕವನಗಳ ವಾಚನ, ವಿಮರ್ಶೆ–ಚರ್ಚೆ ಇಲ್ಲಿ ನಡೆಯುತ್ತದೆ. ಹೊಸದಾಗಿ ಸಾಹಿತ್ಯ ರಚನೆಯಲ್ಲಿ ತೊಡಗುವವರಲ್ಲಿ ಸಾಹಿತ್ಯಾ ಸಕ್ತಿ ಪ್ರಬಲಗೊಂಡು ಸಾಹಿತಿಗಳಾಗಿ ಬೆಳೆಯಲು ಈ ವೇದಿಕೆ ನೆರವಾಗುತ್ತದೆ.

#### 3. 'ಹಸ್ತಪ್ರತಿಶಾಸ್ತ್ರ' ಮತ್ತು 'ಹಸ್ತಪ್ರತಿ ಅಧ್ಯಯನ' ತರಗತಿ

ನಶಿಸುತ್ತಿರುವ ಪ್ರಾಚೀನ ಹಸ್ತಪ್ರತಿಗಳನ್ನು ಓದುವ, ಪ್ರತಿ ಮಾಡುವಕಲೆಯನ್ನು ಇದರಲ್ಲಿ ಕಲಿಸಿಕೊಡುವುದಲ್ಲದೆ, ವೈಜ್ಞಾನಿಕವಾಗಿ ಓಲೆಗರಿ ಗ್ರಂಥಗಳನ್ನು ಸಂರಕ್ಷಿಸುವುದರಲ್ಲೂ ಶಾಸ್ತ್ರೀಯವಾಗಿ ಸಂಪಾದಿಸುವುದರಲ್ಲೂ ತರಬೇತಿಯನ್ನು 1990ರಿಂದ ನಡೆಸುತ್ತಿದೆ. ಕರ್ನಾಟಕದಲ್ಲೇ, ಪ್ರಾಯಶಃ ಭಾರತದಲ್ಲೇ, ಏಕೈಕ ತರಬೇತಿಕೇಂದ್ರ ಇದಾಗಿದೆ.

ಹಸ್ತಪ್ರತಿಶಾಸ್ತ್ರವನ್ನು ಹಾಗೂ 'ಹಸ್ತಪ್ರತಿ ಅಧ್ಯಯನ' ಡಿಪ್ಲೊಮ ತರಗತಿಗಳನ್ನು 2006 ರಿಂದ ನಡೆಸಲಾಗುತ್ತಿದೆ. ಇದು ನೂತನ ಅಧ್ಯಯನ ವಿಷಯವಾಗಿದ್ದು ಇದರಲ್ಲಿ ಹಸ್ತಪ್ರತಿಗಳನ್ನು ಸಾಂಸ್ಕೃತಿಕವಾಗಿ ಅಭ್ಯಾಸಕ್ಕೆ ಒಳಪಡಿಸುವ ಚಿಂತನ ಕ್ರಮವಿರುತ್ತದೆ.

#### 4. ಹಸ್ತಪ್ರತಿ ಸಮಾವೇಶ

ಪ್ರತಿ ವರ್ಷವೂ ಪ್ರತಿಷ್ಠಾನವು ರಾಜ್ಯದ ವಿವಿಧೆಡೆಗಳಲ್ಲಿ ಹಸ್ತಪ್ರತಿ ಸಮಾವೇಶವನ್ನು ಆಯೋಜಿಸುತ್ತಿದೆ. ಇದುವರೆಗೆ ಉಜಿರೆ, ಶಿವಮೊಗ್ಗ ಜಿಲ್ಲೆಯ ಶ್ರೀರಾಮಚಂದ್ರಾಪುರ, ತುಮಕೂರಿನಲ್ಲಿ ಸಮ್ಮೇಳನಗಳನ್ನು ನಡೆಸಲಾಗಿದೆ. ಬಿ.ಎಂ.ಶ್ರೀ ಸ್ಮಾರಕಪ್ರತಿಷ್ಠಾನ ಬೆಂಗಳೂರಿನ ಹೊರವಲಯದಲ್ಲಿ ನಡೆಸುವ ಎಲ್ಲಾ ಕಾರ್ಯಕ್ರಮಗಳಲ್ಲೂ ಹಸ್ತಪ್ರತಿ ಪ್ರದರ್ಶನ ನಡೆಸುತ್ತಿದೆ.ಈ ಪ್ರದರ್ಶನಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ.

#### 5. "ಸಿರಿಕಂಟ" – ವಿದ್ಯಾರ್ಥಿಗೋಷ್ಠಿ

ಪ್ರತಿಷ್ಠಾನ ನಡೆಸುತ್ತಿರುವ ಹಸ್ತಪ್ರತಿ ಶಾಸ್ತ್ರ ತರಗತಿಯ ಹತ್ತು ವರ್ಷಗಳ ನೆನಪಿಗಾಗಿ ಹಸ್ತಪ್ರತಿ ವಿದ್ಯಾರ್ಥಿಗಳ ವೇದಿಕೆ "ಸಿರಿಕಂಟ"ವನ್ನು 2000 ದಿಂದ ಆರಂಭಿಸಿದೆ. ಇದು ಮುಖ್ಯವಾಗಿ ಈ ಕೆಳಕಂಡ ಕೆಲವು ಚಟುವಟಿಕೆಗಳನ್ನು ನಡೆಸುತ್ತಿದೆ. ಇದರಲ್ಲಿ ಪ್ರಾಚೀನ ಹಸ್ತಪ್ರತಿಗಳ ಅಧ್ಯಯನದಲ್ಲಿ ನುರಿತ ಆಸಕ್ತರು ಹಾಗೂ ತಜ್ಞರಿದ್ದಾರೆ.

**ಅ. ಹಳಗನ್ನಡ ಕಾವ್ಯಾಭ್ಯಾಸ ಶಿಬಿರ :** ಹಳಗನ್ನಡ ಕಾವ್ಯಗಳ ಓದು, ಅರ್ಥ ಗ್ರಹಿಕೆ, ಬೋಧನೆ, ಅಧ್ಯಯನಗಳ ಅನುಕೂಲಕ್ಕಾಗಿ ಪುನರ್ಮನನ ಮತ್ತು ಅಭ್ಯಾಸ ತರಗತಿಗಳಂತೆ ನಡೆಯುವ ಒಂದು ತಿಂಗಳ ಶಿಬಿರಗಳನ್ನು ನಡೆಸಲಾಗುತ್ತಿದೆ.

**ಆ. ಹಸ್ತಪ್ರತಿ ಸೇವಾ ಕೇಂದ್ರ :** ಅಪೇಕ್ಷಿಸಿದವರಿಗೆ ತಮ್ಮಲ್ಲಿರುವ ಪ್ರಾಚೀನ ಹಸ್ತ ಪ್ರತಿಗಳನ್ನು ವೈಜ್ಞಾನಿಕವಾಗಿ ಸಂರಕ್ಷಿಸಿ ಕೊಡುವುದಲ್ಲದೆ ಸೂಚಿ, ಸಂಪ್ರತಿ, ಸಂಪಾದನೆ ಇತ್ಯಾದಿ ಸೇವೆಯನ್ನು ನುರಿತ ತಜ್ಞರಿಂದ ಒದಗಿಸಲಾಗುತ್ತದೆ.

**ಇ. ಹಸ್ತಪ್ರತಿಕಾರ್ಯಾಗಾರ :** ಹಸ್ತಪ್ರತಿ ಸಂರಕ್ಷಣೆ ಮತ್ತು ತಿಳುವಳಿಕೆ ಕುರಿತ ಅಲ್ಪಾವಧಿಯ ಕಾರ್ಯಾಗಾರಗಳನ್ನು ಆಹ್ವಾನಿತ ಸಂಸ್ಥೆಗಳ ನೆರವಿನೊಂದಿಗೆ ನಡೆಸುತ್ತದೆ.

**ಈ.ಮನೆಬಾಗಿಲಿಗೆ ಹಸ್ತಪ್ರತಿದರ್ಶನ :** ಈ ಯೋಜನೆಯಲ್ಲಿ ನಾಡಿನಾದ್ಯಂತ ಆಹ್ವಾನ ನೀಡುವ ಶಾಲೆ–ಕಾಲೇಜು, ಸಂಘ ಸಂಸ್ಥೆಗಳಲ್ಲಿ ಪ್ರಾಚೀನ ಹಸ್ತಪ್ರತಿ ಪ್ರದರ್ಶನವನ್ನು ನಡೆಸಿ ಜಾಗೃತಿ ಉಂಟು ಮಾಡಲಾಗುತ್ತಿದೆ.

#### 6. ದತ್ತಿ ಉಪನ್ಯಾಸಗಳು

ನಾಡಿನ ಹಲವಾರು ಗಣ್ಯಾತಿ ಗಣ್ಯರ ಹೆಸರುಗಳಲ್ಲಿ ಸ್ಥಾಪಿಸಲಾಗಿರುವ ಸುಮಾರು 40 ದತ್ತಿನಿಧಿಗಳಿಂದ ಪ್ರತಿ ವರ್ಷ ಸಾಹಿತ್ಯ–ಸಂಸ್ಕೃತಿ–ಸಂಶೋಧನೆಕುರಿತು ಮೌಲಿಕ ಉಪನ್ಯಾಸಗಳನ್ನು, ವಿಚಾರ ಗೋಷ್ಠಿಗಳನ್ನು ನಡೆಸಲಾಗುತ್ತಿದೆ.

#### 7. ಸಾಹಿತ್ಯ ಪ್ರಶಸ್ತಿಗಳು

ಪ್ರತಿಷ್ಠಾನದಲ್ಲಿರುವ ಕೆಲವು ದತ್ತಿ ನಿಧಿಗಳ ಮೂಲಕ ಈ ಕೆಳಕಂಡ ಸಾಹಿತ್ಯ ಪ್ರಶಸ್ತಿಗಳನ್ನು ನೀಡಲಾಗುತ್ತಿದೆ.

**ಅ. ಸಾವಿತ್ರಮ್ಮದತ್ತಿ ಮಹಿಳಾ ಮತ್ತು ಮಕ್ಕಳ ಸಾಹಿತ್ಯ ಪ್ರಶಸ್ತಿ :** ಒಂದು ವರ್ಷ ಮಹಿಳಾ ಸೃಜನೇತರ ಸಾಹಿತ್ಯಕ್ಕೆ, ಇನ್ನೊಂದು ವರ್ಷ ಮಕ್ಕಳ ಸಾಹಿತ್ಯಕ್ಕೆ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಪ್ರಶಸ್ತಿಯ ಮೊತ್ತರೂ. 1,000–00 ಈ ಎರಡೂ ಸಾಹಿತ್ಯ ಪ್ರಕಾರಗಳ ಪುರಸ್ಕಾರಕ್ಕಾಗಿ ಎಂ.ವಿ.ಸೀ. ಅವರು ಇದನ್ನು 1988ರಲ್ಲಿ ಸ್ಥಾಪಿಸಿದ್ದಾರೆ.